6

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 06
ಮಾನ್ಯ ಸದಸ್ಯರ ಹೆಸರು : ಶ್ರೀ ಎಂ.ಪಿ ಸುನೀಲ್ ಸುಬ್ರಮಣಿ (ಸ್ಥಳೀಯ ಸಂಸ್ಥೆ ಕ್ಷೇತ್ರದಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 13.12.2021
ಉತ್ತರಿಸಬೇಕಾದ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಡಿಯಲ್ಲಿ ನವಜಾತ ಶಿಶುವಿನಿಂದ 15 ವರ್ಷಗಳವರೆಗಿನ ಮಕ್ಕಳಿಗೆ ಉಚಿತವಾಗಿ ನೀಡುವ ಲಸಿಕೆಗಳು ಯಾವುವು; ಅವುಗಳನ್ನು ಯಾವ ಅವಧಿಯಲ್ಲಿ ನೀಡಲಾಗುವುದು ಮತ್ತು ಯಾವ ಯಾವ ರೋಗಗಳ ವಿರುದ್ಧವಾಗಿ ನೀಡಲಾಗುತ್ತಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಡಿಯಲ್ಲಿ ನವಜಾತ ಶಿಶುವಿನಿಂದ 15 ವರ್ಷಗಳವರೆಗಿನ ಮಕ್ಕಳಿಗೆ ಉಚಿತವಾಗಿ ನೀಡುವ ಲಸಿಕೆಗಳು, ಯಾವ ಅವಧಿಯಲ್ಲಿ ಮತ್ತು ಯಾವ ಯಾವ ರೋಗಗಳ ವಿರುದ್ಧವಾಗಿ ನೀಡಲಾಗುತ್ತಿದೆ ಎಂಬ ವಿವರವನ್ನು **ಅನುಬಂಧ-01ರಲ್ಲಿ** ನೀಡಲಾಗಿದೆ. |
| ಆ) | ಈ ಸರ್ಕಾರಿ ಉಚಿತ ಲಸಿಕೆಗಳ ಜೊತೆಗೆ ಖಾಸಗಿ ಆಸ್ಪತ್ರೆಗಳಲ್ಲಿ ನೀಡುತ್ತಿರುವ ಇತರೆ ಲಸಿಕೆಗಳ ಬಗೆಗಿನ ಮಾಹಿತಿ ಸರ್ಕಾರದ ಗಮನದಲ್ಲಿದೆಯೇ; ಹಾಗಿದ್ದಲ್ಲಿ, ಅವುಗಳು ಯಾವುವು; ಇವುಗಳನ್ನು ಯಾವ ರೋಗದ ವಿರುದ್ಧವಾಗಿ ನೀಡಲಾಗುತ್ತಿದೆ; ನೀಡುತ್ತಿದ್ದರೆ, ವಿವರ ನೀಡುವುದು; | ಹೌದು,<br><br>ಸರ್ಕಾರಿ ಉಚಿತ ಲಸಿಕೆಗಳ ಜೊತೆಗೆ ಖಾಸಗಿ ಆಸ್ಪತ್ರೆಗಳಲ್ಲಿ ನೀಡುತ್ತಿರುವ ಇತರೆ ಲಸಿಕೆಗಳ ಬಗ್ಗೆ ಮಾಹಿತಿಯ ವಿವರವನ್ನು **ಅನುಬಂಧ-2ರಲ್ಲಿ** ನೀಡಲಾಗಿದೆ. |
| ಇ) | ಖಾಸಗಿ ಆಸ್ಪತ್ರೆಗಳಲ್ಲಿ ನೀಡುತ್ತಿರುವ ಈ ಲಸಿಕೆಗಳು ಮಕ್ಕಳಿಗೆ ಅತ್ಯಾವಶ್ಯಕವಾಗಿವೆಯೇ; ಇವುಗಳನ್ನು ಸರ್ಕಾರವೇ ಖರೀದಿಸಿ, ರಾಜ್ಯದ ಎಲ್ಲಾ ಮಕ್ಕಳಿಗೆ ನೀಡಲು ಸರ್ಕಾರದ ಚಿಂತನೆಗಳೇನು? (ವಿವರ ನೀಡುವುದು) | ರಾಜ್ಯದಲ್ಲಿ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮವನ್ನು ಭಾರತ ಸರ್ಕಾರದ ಮಾರ್ಗಸೂಚಿಯಂತೆ ಅನುಷ್ಠಾನಗೊಳಿಸಲಾಗುತ್ತಿದೆ. National Expert Group On Vaccine Administration (NEGVAC) ಮತ್ತು National Technical Advisory Group On Immunization (NTAGI) ರವರ ಶಿಫಾರಸ್ಸನ್ನಾಧರಿಸಿ ಭಾರತ ಸರ್ಕಾರವು ಸಾರ್ವತ್ರಿಕ ಲಸಿಕಾ ಕಾರ್ಯಕ್ರಮದ ವೇಳಾಪಟ್ಟಿಯನ್ನು ನಿರ್ಧರಿಸುತ್ತದೆ ಹಾಗೂ ಅದರಂತೆ ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ. ಈ ಲಸಿಕೆಗಳನ್ನು ಭಾರತ ಸರ್ಕಾರವೇ ಉಚಿತವಾಗಿ ಸರಬರಾಜು ಮಾಡುತ್ತಿದ್ದು, ಸಾರ್ವತ್ರಿಕಾ ಲಸಿಕಾ ಕಾರ್ಯಕ್ರಮದಡಿಯಲ್ಲಿ ಎಲ್ಲಾ ಆರೋಗ್ಯ ಕೇಂದ್ರಗಳು, ಅಂಗನವಾಡಿ ಕೇಂದ್ರಗಳು ಮತ್ತು ಶಾಲೆಗಳಲ್ಲಿ ಉಚಿತವಾಗಿ ಲಸಿಕಾಕರಣ ನಡೆಸಲಾಗುತ್ತಿದೆ.<br><br>ಆದ್ದರಿಂದ, ಖಾಸಗಿ ಆಸ್ಪತ್ರೆಗಳಲ್ಲಿ ನೀಡಲಾಗುತ್ತಿರುವ ಈ ಲಸಿಕೆಗಳನ್ನು ರಾಜ್ಯದ ವತಿಯಿಂದ ಖರೀದಿಸಿ, ನೀಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

**ಸಂಖ್ಯೆ: ಆಕುಕ 91 ಎಸ್.ಟಿ.ಕ್ಯೂ 2021**

(ಡಾ|| ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು.

ಅನುಬಂಧ-1

| ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ - ಲಸಿಕಾ ವೇಳಾಪಟ್ಟಿ - 2021 | | |
|---|---|---|
| ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | | |
| ವಯಸ್ಸು | ಲಸಿಕೆ | ತಡೆಗಟ್ಟುವ ರೋಗ |
| ಹುಟ್ಟಿದ ಕೂಡಲೇ | ಹೆಪಟೈಟಿಸ್ ಬಿ | ಹೆಪಟೈಟಿಸ್ ಬಿ |
| | ಓ.ಪಿ.ವಿ - 0 | ಪೋಲಿಯೋ |
| | ಬಿ.ಸಿ.ಜಿ | ಬಾಲಕ್ಷಯ |
| 6 ವಾರ | ಓ.ಪಿ.ವಿ-1,<br>ರೋಟಾ-1,<br>ಐ.ಪಿ.ವಿ-1,<br>ಪಿ.ಸಿ.ವಿ-1,<br>ಪೆಂಟಾವೆಲೆಂಟ್-1 | ಪೋಲಿಯೋ,<br>ರೋಟಾವೈರಸ್ ಅತಿಸಾರ<br>ನ್ಯೂಮೊಕಾಕಲ್ ಕಾಯಿಲೆ<br>ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು, ಹೆಚ್ ಇನ್ಫ್ಲೂ ಏನ್‌ಜ಼ ಬಿ ಮತ್ತು ಹೆಪಟೈಟಿಸ್ ಬಿ |
| 10 ವಾರ | ಓ.ಪಿ.ವಿ-2<br>ರೋಟಾ-2<br>ಪೆಂಟಾವೆಲೆಂಟ್-2 | ಪೋಲಿಯೋ<br>ರೋಟಾವೈರಸ್ ಅತಿಸಾರ<br>ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು, ಹೆಚ್ ಇನ್ಫ್ಲೂ ಏನ್‌ಜ಼ ಬಿ ಮತ್ತು ಹೆಪಟೈಟಿಸ್ ಬಿ, |
| 14 ವಾರ | ಓ.ಪಿ.ವಿ-3<br>ರೋಟಾ-3<br>ಐ.ಪಿ.ವಿ-2<br>ಪಿ.ಸಿ.ವಿ-2<br>ಪೆಂಟಾವೆಲೆಂಟ್-3 | ಪೋಲಿಯೋ,<br>ರೋಟಾವೈರಸ್ ಅತಿಸಾರ<br>ನ್ಯೂಮೊಕಾಕಲ್ ಕಾಯಿಲೆ<br>ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು, ಹೆಚ್ ಇನ್ಫ್ಲೂ ಏನ್‌ಜ಼ ಬಿ ಮತ್ತು ಹೆಪಟೈಟಿಸ್ ಬಿ |
| 9 ತಿಂಗಳು | ದಡಾರ ರುಬೆಲ್ಲಾ-1<br>ಪಿ.ಸಿ.ವಿ-ವರ್ಧಕ<br>ಜೆಇ-1*<br>ವಿಟಮಿನ್ ಎ - 1 | ದಡಾರ ಮತ್ತು ರುಬೆಲ್ಲಾ<br>ನ್ಯೂಮೊಕಾಕಲ್ ಕಾಯಿಲೆ<br>ಮೆದಳು ಜ್ವರ (ಜಪಾನೀಸ್ ಎನ್ಸೆಫಲೈಟಿಸ್)<br>ಇರುಳು ಕುರುಡು |
| 16-23 ತಿಂಗಳು | ದಡಾರ ರುಬೆಲ್ಲಾ -2<br>ಜೆಇ-2* | ದಡಾರ ಮತ್ತು ರುಬೆಲ್ಲಾ<br>ಮೆದಳು ಜ್ವರ (ಜಪಾನೀಸ್ ಎನ್ಸೆಫಲೈಟಿಸ್) |
| | ಓ.ಪಿ.ವಿ ವರ್ಧಕ<br>ಡಿಪಿಟಿ ವರ್ಧಕ-1 | ಪೋಲಿಯೋ<br>ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು |
| | ವಿಟಮಿನ್ ಎ - 2 | ಇರುಳು ಕುರುಡು |
| 5-6 ವರ್ಷ | ಡಿಪಿಟಿ ವರ್ಧಕ-2 | ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು |
| 10 ವರ್ಷ | ಟಿ.ಡಿ | ಗಂಟಲುಮಾರಿ ಮತ್ತು ಧನುರ್ವಾಯು |
| 16 ವರ್ಷ | ಟಿ.ಡಿ | |

**ಅನುಬಂಧ–2**

| ಸರ್ಕಾರಿ ಆಸ್ಪತ್ರೆಗಳಲ್ಲಿ ನೀಡುತ್ತಿರುವ ಲಸಿಕೆಗಳನ್ನು ಹೊರತುಪಡಿಸಿ ಖಾಸಗಿ ಆಸ್ಪತ್ರೆಗಳಲ್ಲಿ ನೀಡುತ್ತಿರುವ ಇತರೆ ಲಸಿಕೆಗಳ ಮಾಹಿತಿ | | |
|---|---|---|
| **ವಯಸ್ಸು** | **ಲಸಿಕೆ** | **ತಡೆಗಟ್ಟುವ ರೋಗ** |
| 6 ತಿಂಗಳು | ಇನ್ಫ್ಲುಏನ್ಜ | ಇನ್ಫ್ಲುಏನ್ಜ |
| 7 ತಿಂಗಳು | ಇನ್ಫ್ಲುಏನ್ಜ–2 | |
| 6 ರಿಂದ 9 ತಿಂಗಳು | ಟೈಫಾಯಿಡ್ ಸಿವಿ | ಟೈಫಾಯಿಡ್ |
| 9 ತಿಂಗಳು | ಎಂಎಂಆರ್–1 | ಗದಗಟ್ಟು , ದಡಾರ ಮತ್ತು ರುಬೆಲ್ಲಾ |
| 12 ತಿಂಗಳು | ಹೆಪಟೈಟೀಸ್ ಎ1 | ಹೆಪಟೈಟೀಸ್ ಎ |
| 15 ತಿಂಗಳು | ಎಂಎಂಆರ್–2<br>ವೆರಿಸೆಲ್ಲಾ–1 | ಗದಗಟ್ಟು , ದಡಾರ ಮತ್ತು ರುಬೆಲ್ಲಾ, ಸೀತಾಳೆ ಸಿಡುಬು (Chicken pox) |
| 16 ರಿಂದ 18 ತಿಂಗಳು | ಟಿ.ಡಿ.ಎ.ಪಿ (TDaP) | ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು |
| 18 ರಿಂದ 19 ತಿಂಗಳು | ಹೆಪಟೈಟೀಸ್ ಎ2<br>ವೆರಿಸೆಲ್ಲಾ–2 | ಹೆಪಟೈಟೀಸ್ ಎ<br>ಸೀತಾಳೆ ಸಿಡುಬು (Chicken pox) |
| 4 ರಿಂದ 6 ವರ್ಷ | ಎಂಎಂಆರ್–3, | ಗದಗಟ್ಟು , ದಡಾರ ಮತ್ತು ರುಬೆಲ್ಲಾ |
| 10 ರಿಂದ 12 ವರ್ಷ | ಹೆಚ್‌ಪಿವಿ<br>ಟಿ.ಡಿ.ಎ.ಪಿ (TDaP) | Human papilomavirus<br>ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು |
| 16 ವರ್ಷ | ಟಿ.ಡಿ.ಎ.ಪಿ (TDaP) | ಗಂಟಲುಮಾರಿ, ನಾಯಿಕೆಮ್ಮು, ಧನುರ್ವಾಯು |